


# ಜ್ಯೋತಿಷ ಮಿತ್ರ

## ಆನ್‌ಲೈನ್ ದಿನಪತ್ರಿಕೆ

www.jyothishamithra.com

ಸಂಚಿಕೆ : 1338 03-05-2022 ಮಂಗಳವಾರ

ಶುಭಕೃತ್ ಸಂವತ್ಸರ ಉತ್ತರಾಯಣ ವಸಂತಋತು ವೈಶಾಖಮಾಸ ಶುಕ್ಲಪಕ್ಷ

| ನಿತ್ಯ ಪಂಚಾಂಗ | ಸುಜ್ಞಾನ |
|---|---|
| ತಿಥಿ : ತದಿಗೆ (30:09)<br>ನಕ್ಷತ್ರ : ರೋಹಿಣೀ (27:17)<br>ರಾಹುಕಾಲ :<br>03:36 PM - 05:10 PM<br>ಗುಳಿಕಕಾಲ :<br>12:27 PM - 02:01 PM | ಯಾವುದನ್ನೂ ಅತಿಯಾಗಿ ಬಯಸಬೇಡಿ. ಆಸೆಯೇ ನಮ್ಮನ್ನು ದುಃಖಕ್ಕೆ ಒಳಪಡಿಸುವ ಮೊದಲ ಅಂಶ.<br>- ಸ್ವಾಮಿ ವಿವೇಕಾನಂದ |



# ಮಹಾ ಬಲಶಾಲಿ ಹನುಮ

ಮಹಾಬೀರ್ ಭಜರಂಗ ಬಲಿ, ಪವನಸುತ ಹನುಮಾನ್(ವಾಯುಪುತ್ರ), ಹನುಮಂತನ ತಾಯಿ ಅಂಜನಾದೇವಿ. ಹನುಮಂತ ಮಹಾಬಲಶಾಲಿ. ಆದರೆ ಅವನ ಶಕ್ತಿ ಅವನಿಗೆ ತಿಳಿದಿಯದಿರಲಿ ಎಂದು ಅವನಿಗೆ ಶಾಪವಿದೆ. ಹನುಮಂತನನ್ನು ಆರಾಧಿಸಿದರೆ ಎಂತಹ ಭೂತ-ಪ್ರೇತಗಳೂ ಓಡಿ ಹೋಗುವವು. ಇವನು ಬ್ರಹ್ಮಚಾರಿ. ಆದರೆ ಹನುಮಂತನನ್ನು ಪ್ರತಿದಿನ ಆರಾಧಿಸಿದರೆ ಸಂತಾನವನ್ನು ಕರುಣಿಸುತ್ತಾನೆ. ನಮ್ಮ

ದೇಶದಲ್ಲಿ ಹನುಮಂತನನ್ನು ಯುದ್ಧದಲ್ಲಿ ಯೋಧರು ಮತ್ತು ಕುಸ್ತಿ ಪಟುಗಳು ಪೂಜಿಸುತ್ತಾರೆ. ಹನುಮಂತನ ಸ್ಮರಣೆ ಮಾತ್ರದಿಂದಲೇ ಅವರಿಗೆ ಭೀಮಬಲ ಬರುತ್ತದೆ. ಆದ್ದರಿಂದ ಅವರು ಯುದ್ಧಕ್ಕೆ ಹೋಗುವ ಮುನ್ನ, ಕುಸ್ತಿ ಅಖಾಡಕ್ಕೆ ಇಳಿಯುವ ಮುನ್ನ "ಜೈ ಭಜರಂಗ ಬಲೀ" ಎಂದು ಅಬ್ಬರಿಸುತ್ತಾ ರಂಗಕ್ಕೆ ಇಳಿಯುತ್ತಾರೆ. ಹನುಮಂತನ ಸಿದ್ಧಿಯಿಂದ ಸಾಧಕನಿಗೆ – ಉತ್ತಮ ಆರೋಗ್ಯ, ಸೌಂದರ್ಯ, ಚೇತನಾ, ಶಕ್ತಿ ಹೊಂದಿ ವ್ಯಾಧಿಗಳಿಂದ ಮುಕ್ತಿ ಹೊಂದುತ್ತಾರೆ.

ಓಂ ನಮೋ ಭಗವತೇ ಪ್ರಳಯ ಕಾಲವೀರ ಹನುಮಾನ ಚಿಟಿ ಚಿಟಿ
ಪ್ರೋಟಾಯ ಪ್ರೋಟಾಯ ಆಂಜನೇಯ ಆವೇಶಂ ಕುರು ಕುರು
ಫಟ್ ಸ್ವಾಹಾ ||

ಈ ಮಂತ್ರವನ್ನು ಪ್ರತಿದಿನ ನೂರೆಂಟು ಸಲ ಪಠಿಸುತ್ತಿದ್ದರೆ ಮೈಯಲ್ಲಿ ಬಲ, ಧೈರ್ಯ, ಸ್ಥೈರ್ಯ ಬರುವುದು. ಬುದ್ಧಿ ಚಂಚಲವಾಗುವುದಿಲ್ಲ. ಗುರು




**ಪೂರ್ವಾಜನ್ಮಾರ್ಜಿತಂ ಕರ್ಮ ಶುಭಂ ವಾ ಯದಿ ವಾ ಶುಭಂ**

**ತಸ್ಯ ಪಕ್ತಿಂ ಗ್ರಹಾಸ್ಸರ್ವೇ ಸೂಚಯಂತೀಹ ಜನ್ಮನೀ ||**

ಪೂರ್ವ ಜನ್ಮದ ಕರ್ಮ ಫಲದಿಂದುಂಟಾಗುವ ಈ ಜನ್ಮದ ಶುಭಾಶುಭ ಫಲಗಳನ್ನು ನವಗ್ರಹರು ಸೂಚಿಸುತ್ತಾರೆ. ಒಬ್ಬ ವ್ಯಕ್ತಿ ಹುಟ್ಟುವಾಗ ಇರುವ ಗ್ರಹರ ಸ್ಥಿತಿಗನುಗುಣವಾಗಿ ಆ ವ್ಯಕ್ತಿ ಶುಭ ಅಶುಭ ಫಲಗಳನ್ನು ಅನುಭವಿಸ ಬೇಕಾಗುತ್ತದೆ.

ಲಗ್ನವೆಂದರೆ ಆತ್ಮ ಎಂದರ್ಥ. ಆತ್ಮಕಾರಕ – ಲಗ್ನಕಾರಕ ರವಿಗ್ರಹ. ಆತ್ಮಕ್ಕೆ ಸಾವಿಲ್ಲ. ನಾವು ಹಿಂದಿನ ಹಲವು ಜನ್ಮಗಳಲ್ಲಿ ಮಾಡಿದ ಶುಭ ಅಶುಭ ಕರ್ಮಗಳು ಆತ್ಮದಲ್ಲಿ ಉಳಿದಿರುತ್ತದೆ. ನಾವು ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಕ್ಕನುಗುಣವಾಗಿ ದ್ವಾದಶ ಲಗ್ನಗಳಲ್ಲಿ ಒಂದು ಲಗ್ನ ಉದಯವಾಗುತ್ತದೆ. ಆ ಲಗ್ನದಂತೆ ನಮ್ಮ ಗುಣ ಸ್ವಭಾವ ಇರುತ್ತದೆ.

<table>
<tr><td>ಕುಜ<br>ಶುಕ್ರ</td><td>ಗುರು</td><td></td><td></td></tr>
<tr><td>ರವಿ ಬುಧ<br>ಚಂದ್ರ</td><td colspan="2" rowspan="2">ಗ್ರಹ ಕುಂಡಲಿ</td><td>ಕೇತು</td></tr>
<tr><td>ರಾಹು</td><td></td></tr>
<tr><td></td><td></td><td>ಶನಿ</td><td>ಲಗ್ನ</td></tr>
</table>

ಈ ಕನ್ಯಾ ಲಗ್ನದ ಸ್ತ್ರೀ ಜಾತಕದಲ್ಲಿ ಲಗ್ನಾಧಿಪತಿ ಬುಧನು ದುಸ್ಥಾನವಾದ ಷಷ್ಠದಲ್ಲಿ ನೀಚಗಾಮಿನಿಯಾಗಿ ಶತ್ರುವಾದ ಚಂದ್ರನಿಂದ ಯುಕ್ತನು. ಬುಧನ ಕುಂಭರಾಶಿಯ ಫಲವು 'ಪರಕರ್ಮಕೃದಸ್ವಃ' ಎನ್ನುವುದಾಗಿ ಅಷ್ಟು ಶುಭವಲ್ಲ. ಲಗ್ನಕಾರಕ ರವಿಯೂ ಕೂಡ ಶತೃಕ್ಷೇತ್ರದಲ್ಲಿ ಇರುವನು. ಜನ್ಮರಾಶ್ಯಾಧಿಪತಿ ಉಚ್ಚನಾಗಿದ್ದು ಗುರು-ಕುಜ ದೃಷ್ಟರಾಗಿರುವನು. ಲಗ್ನಕ್ಕೆ ಕುಜನ ಅಂಶವಿದ್ದು ಶುಕ್ರಯುಕ್ತ ಕುಜನ ದೃಷ್ಟಿ ಇರುವ ಪ್ರಯುಕ್ತ ಜಾತಕಳು ಬಿಳಿ, ಕೆಂಪು ವರ್ಣದವಳಾಗಿರುವಳು.

| | | | |
|---|---|---|---|
| | ಲಗ್ನ | | ರಾಹು |
| | ನವಾಂಶ ಕುಂಡಲಿ | | |
| ಬುಧ ಚಂದ್ರ | | | |
| ಶುಕ್ರ ಕೇತು | ಶನಿ | ರವಿ ಕುಜ ಗುರು | |

ನವಾಂಶ ಕುಂಡಲಿಯಲ್ಲಿಯೂ ಲಗ್ನಕ್ಕೆ ಕುಜ-ಗುರು ದೃಷ್ಟಿ ಇರುವ ಪ್ರಯುಕ್ತ ಸ್ವಲ್ಪ ಅರಸಿನ ಬಣ್ಣದ ಬಿಳಿಕೆಂಪು ವರ್ಣದವಳಾಗಿರುವಳು.

ಆದರೆ ಗ್ರಹ ಕುಂಡಲಿಯಲ್ಲಿ ಲಗ್ನಾಧಿಪತಿ ಷಷ್ಠದಲ್ಲಿರುವುದರಿಂದಲೂ ರಾಶ್ಯಾಧಿಪತಿಗೆ ಕುಜನ ದೃಷ್ಟಿರುವುದರಿಂದ ದೇಹಾರೋಗ್ಯ ಸರಿ ಇಲ್ಲ. ಬಾಲ್ಯದಿಂದಲೂ ನೇತ್ರ ಮತ್ತು ಕುತ್ತಿಗೆಯಲ್ಲಿ ತುಸು ದೋಷವುಳ್ಳವಳಾಗಿರುವಳು. ಲಗ್ನಾಧಿಪತಿಯ ಪಾಪಕರ್ತರೀ ಯೋಗವನ್ನು ಗಮನಿಸಬಹುದು.

# ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ

ಗೌರವ ಸಂಪಾದಕರು : ಜೀವನ್ ಉಳ್ಳಾಲ್

ಸಂಪಾದಕರು : ಶ್ರೀಷ ಎಸ್.



ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.

PH : 9986671473 / 9535283535

jmonline@gmail.com www.jyothishamithra.com